# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 166

ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ

ಉತ್ತರಿಸಬೇಕಾದ ದಿನಾಂಕ : 13-09-2021

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

***

| | ಪ್ರಶ್ನೆ | | ಉತ್ತರ |
|---|---|---|---|
| ಅ) | ರಾಜ್ಯದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಅಡಿಯಲ್ಲಿ ಎಷ್ಟು ವಿದ್ಯುತ್ ಪ್ರಸರಣ ನಿಗಮಗಳು ಕಾರ್ಯನಿರ್ವಹಿಸುತ್ತಿವೆ; ಅವುಗಳು ಯಾವುವು; | ಅ) | ರಾಜ್ಯದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಒಟ್ಟು 6 ಪ್ರಸರಣ ವಲಯಗಳು ಕಾರ್ಯನಿರ್ವಹಿಸುತ್ತಿವೆ. (ಬೆಂಗಳೂರು, ಮೈಸೂರು, ಬಾಗಲಕೋಟೆ, ಹಾಸನ, ತುಮಕೂರು ಮತ್ತು ಕಲಬುರಗಿ)<br>ರಾಜ್ಯದಲ್ಲಿ ಒಟ್ಟು 5 ವಿದ್ಯುತ್ ಸರಬರಾಜು ಕಂಪನಿಗಳು ಕಾರ್ಯನಿರ್ವಹಿಸುತ್ತಿವೆ.<br>1. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ.<br>2. ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ.<br>3. ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ.<br>4. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ.<br>5. ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ. |
| ಆ) | ಈ ನಿಗಮಗಳ ವ್ಯಾಪ್ತಿಯಲ್ಲಿ ಇನ್ನು ಮುಂದೆ ವಿದ್ಯುತ್ ಗೃಹ ಬಳಕೆದಾರರು ಪ್ರೀ ಪೇಯ್ಡ್ ಸ್ಮಾರ್ಟ್ ಮೀಟರ್‌ಗಳನ್ನು ಅಳವಡಿಸಿಕೊಳ್ಳುವುದನ್ನು ಜಾರಿಗೆ ತರುವಂತೆ ಕೇಂದ್ರ ಇಂಧನ ಸಚಿವಾಲಯವು ರಾಜ್ಯ ಸರ್ಕಾರಕ್ಕೆ ನಿರ್ದೇಶನ ನೀಡಿರುವುದು ನಿಜವೇ; ಹಾಗಿದ್ದಲ್ಲಿ, ಸರ್ಕಾರ ಇದುವರೆಗೆ ಯಾವ ಕ್ರಮಗಳನ್ನು ಕೈಗೊಂಡಿದೆ; (ವಿವರ ನೀಡುವುದು) | ಆ) | ಕೇಂದ್ರ ಸರ್ಕಾರದ ನೂತನ ಯೋಜನೆಯಾದ Revamped Distribution Sector Scheme (RDSS) ಯೋಜನೆಯಲ್ಲಿ ಮೀಟರ್ ಅಳವಡಿಕೆಯು ಒಂದು ಘಟಕವಾಗಿದ್ದು, ಪ್ರೀ ಪೇಯ್ಡ್ ಸ್ಮಾರ್ಟ್ ಮೀಟರ್‌ಗಳನ್ನು ಮೊದಲನೇ ಹಂತದಲ್ಲಿ ಶೇ 15 ಕ್ಕಿಂತ ಅಧಿಕ AT& C ನಷ್ಟವಿರುವ ಅಮೃತ ನಗರ/ಪಟ್ಟಣಗಳಲ್ಲಿ, ಕೈಗಾರಿಕಾ ಹಾಗೂ ವಾಣಿಜ್ಯ ಗ್ರಾಹಕರಿಗೆ, ಎಲ್ಲಾ ತಾಲ್ಲೂಕು ಮಟ್ಟದ ಮತ್ತು ಮೇಲ್ಪಟ್ಟ ಸರ್ಕಾರಿ ಕಛೇರಿಗಳಿಗೆ ಹಾಗೂ ಹೆಚ್ಚು AT& C ನಷ್ಟವಿರುವ ಇನ್ನಿತರೇ ಪ್ರದೇಶಗಳಲ್ಲಿ ಅಳವಡಿಸಲು ಮಾರ್ಗಸೂಚಿಯಲ್ಲಿ ತಿಳಿಸಲಾಗಿದೆ.<br>ಸದರಿ ಯೋಜನೆಗೆ ಸಂಬಂಧಿಸಿದಂತೆ ಕಾರ್ಯ ಯೋಜನೆಯನ್ನು ಸಿದ್ಧಪಡಿಸಲು, ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಪರಿಶೀಲಿಸಲಾಗುತ್ತಿದೆ. |

| | | | |
|---|---|---|---|
| ಇ) | ಬೆಂಗಳೂರು ನಗರದಲ್ಲಿ ವಿದ್ಯುತ್ ಗೃಹ ಬಳಕೆಗೆ ಸಂಬಂಧಿಸಿದಂತೆ, ಪ್ರೀ ಪೇಯ್ಡ್ ವಿದ್ಯುತ್ ಮೀಟರ್ ಅನ್ನು ಪ್ರಾಯೋಗಿಕವಾಗಿ ಈಗಾಗಲೇ ಅಳವಡಿಸಲಾಗಿದೆಯೇ; ಈ ನಿಮಿತ್ತ ಕೈಗೊಳ್ಳಬೇಕೆಂದಿರುವ ಸರ್ಕಾರದ ಮುಂದಿರುವ ಯೋಜನೆಗಳಾವುವು; | ಇ) | ಬೆಂಗಳೂರು ನಗರದಲ್ಲಿ ವಿದ್ಯುತ್ ಗೃಹ ಬಳಕೆಗೆ ಸಂಬಂಧಿಸಿದಂತೆ, ಪ್ರೀ ಪೇಯ್ಡ್ ವಿದ್ಯುತ್ ಮೀಟರ್ ಅನ್ನು ಪ್ರಾಯೋಗಿಕವಾಗಿ ಅಳವಡಿಸಲಾಗಿಲ್ಲ.<br><br>ಕೇಂದ್ರ ಸರ್ಕಾರದ ನೂತನ ಯೋಜನೆಯಾದ Revamped Distribution Sector Scheme (RDSS) ಯೋಜನೆಯ ಮಾರ್ಗಸೂಚಿಯನ್ವಯ, ಕಾರ್ಯ ಯೋಜನೆಯನ್ನು ಸಿದ್ಧಪಡಿಸಲು, ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಪರಿಶೀಲಿಸಲಾಗುತ್ತಿದೆ. |
| ಈ) | ವಿದ್ಯುತ್ ಗೃಹ ಬಳಕೆದಾರರು ಪ್ರೀ ಪೇಯ್ಡ್ ವಿದ್ಯುತ್ ಮೀಟರ್‌ನ್ನು ಅಳವಡಿಸಿಕೊಂಡ ನಂತರ, ಅವರಿಗೆ ಪ್ರೋತ್ಸಾಹ ಧನ ನೀಡುವ ಯೋಜನೆ ಸರ್ಕಾರದ ಮುಂದಿದೆಯೇ? (ಸಂಪೂರ್ಣ ಮಾಹಿತಿ ನೀಡುವುದು) | ಈ) | RDSS ಯೋಜನೆಯಡಿ ವಿದ್ಯುತ್ ಗೃಹ ಬಳಕೆದಾರರು ಪ್ರೀ ಪೇಯ್ಡ್ ವಿದ್ಯುತ್ ಮೀಟರ್ ನ್ನು ಅಳವಡಿಸಿಕೊಂಡ ನಂತರ ಅವರಿಗೆ ಪ್ರೋತ್ಸಾಹ ಧನ ನೀಡುವ ಬಗ್ಗೆ ಯೋಜನೆಯ ಮಾರ್ಗಸೂಚಿಯಲ್ಲಿ ಯಾವುದೇ ಉಲ್ಲೇಖವಿರುವುದಿಲ್ಲ. |

ಸಂಖ್ಯೆ: ಎನರ್ಜಿ 201 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು